# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1085 |
| ಮಾನ್ಯ ಸದಸ್ಯರ ಹೆಸರು | : ಶ್ರೀ ಯು. ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : 15-03-2021 |
| ಉತ್ತರಿಸುವ ಸಚಿವರು | : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಗುಣಮಟ್ಟದ ಚಿಕಿತ್ಸೆ ದೊರೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಗುಣಮಟ್ಟದ ಚಿಕಿತ್ಸೆ ದೊರಕಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | **ಗುಣಮಟ್ಟದ ಚಿಕಿತ್ಸೆ ದೊರಕಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳು ಈ ಕೆಳಕಂಡಂತಿವೆ:**<br><br>ಸರ್ಕಾರವು ಗುಣಮಟ್ಟದ ಚಿಕಿತ್ಸೆ ನೀಡಲು ಸಿಬ್ಬಂದಿ ಅವಶ್ಯವಿರುವಲ್ಲಿ ಖಾಲಿ ಹುದ್ದೆಗಳನ್ನು ತುಂಬಲು ಈಗಾಗಲೇ ಅಧಿಸೂಚನೆ ನೀಡಲಾಗಿದೆ.<br><br>ಗುಣಮಟ್ಟದ ಚಿಕಿತ್ಸೆ ನೀಡಲು ಸಿಬ್ಬಂದಿ ವರ್ಗದವರಿಗೆ ಆಗಿಂದಾಗ್ಗೆ ಪುನರ್ಮನನ ತರಬೇತಿಗಳನ್ನು ನೀಡಲಾಗುತ್ತಿದೆ.<br><br>ಗುಣಮಟ್ಟ ಚಿಕಿತ್ಸೆ ನೀಡಲು ಅವಶ್ಯವಿರುವ ಉಪಕರಣ ಸಲಕರಣೆಗಳನ್ನು ಕೆ.ಎಸ್.ಎಮ್.ಎಸ್.ಸಿ.ಎಲ್ ರವರಿಂದ Karnataka State Medical Supplies Corporation Limited (KSMSCL) ಖರೀದಿಸಿ ಪೂರೈಸಲಾಗುತ್ತಿದೆ.<br><br>ಸರ್ಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಗುಣಮಟ್ಟವನ್ನು ಕಾಪಾಡಲು ರಾಷ್ಟ್ರೀಯ ಕಾರ್ಯಕ್ರಮಗಳಾದ ಲಕ್ಷ್ಯ, ಎನ್‌ಕ್ಯೂಎಎಸ್, ಕಾಯಕಲ್ಪ ಮತ್ತು ಎಸ್‌ಎಸ್‌ಎಸ್, ಮೇರಾ ಆಸ್ಪತಾಲ್ ಹಾಗೂ ಜೀವ ವೈದ್ಯಕೀಯ ತ್ಯಾಜ್ಯ ನಿರ್ವಹಣೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗಿದೆ.<br><br>ಎಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಗುಣಮಟ್ಟವು ಸುಧಾರಿಸುತ್ತಿದೆ.<br><br>2016-17ರಿಂದ ಇದುವರೆಗೂ National Quality Assurace Standards (NQAS) ಕಾರ್ಯಕ್ರಮದಲ್ಲಿ 10 ಸಾರ್ವಜನಿಕ ಆರೋಗ್ಯ ಸಂಸ್ಥೆಗಳು ರಾಷ್ಟ್ರಮಟ್ಟದಿಂದ ನ್ಯಾಷನಲ್ ಸರ್ಟಿಫೀಕೇಶನ್ ಪಡೆದುಕೊಂಡಿವೆ.<br><br>2018-19ರಿಂದ ಇದುವರೆಗೂ Labour Room and Quality Improvement Initiative (LaQshya) ಕಾರ್ಯಕ್ರಮದಲ್ಲಿ 17 ಹೆರಿಗೆ ಆಸ್ಪತ್ರೆಗಳು ರಾಷ್ಟ್ರಮಟ್ಟದಿಂದ ನ್ಯಾಷನಲ್ ಸರ್ಟಿಫೀಕೇಶನ್ |

ಪಡೆದುಕೊಂಡಿವೆ.

**ಕಾಯಕಲ್ಪ:** 2015–16ರಿಂದ ಆಸ್ಪತ್ರೆಗಳಲ್ಲಿ ನೈರ್ಮಲ್ಯ ಮತ್ತು ಶುಚಿತ್ವ ಕಾಪಾಡುವಿಕೆ, ಸೋಂಕು ನಿಯಂತ್ರಣ, ತ್ಯಾಜ್ಯ ನಿರ್ವಹಣೆ

ಅಡಿಯಲ್ಲಿ ಪ್ರತಿವರ್ಷವು ಎಲ್ಲಾ ಸರ್ಕಾರಿ ಆಸ್ಪತ್ರೆಗಳನ್ನು ವರ್ಷಕ್ಕೆ 1 ಬಾರಿ ಮೌಲ್ಯ ಮಾಪನಗೊಳಿಸಲಾಗುತ್ತಿದೆ.

ಒಟ್ಟು 1786 ಆಸ್ಪತ್ರೆಗಳು ಶೇಕಡ 70%ಕಿಂತ ಹೆಚ್ಚು ಅಂಕಗಳನ್ನು ಪಡೆದು ಜಿಲ್ಲಾಮಟ್ಟದಲ್ಲಿ ಪ್ರಶಸ್ತಿಗಳಿಸಿರುತ್ತವೆ.

2015–16ರಿಂದ 2019–20ರವರೆಗೆ ಒಟ್ಟು 19 ಆಸ್ಪತ್ರೆಗಳು ರಾಷ್ಟ್ರಮಟ್ಟದ ಪ್ರಶಸ್ತಿಗೆ ಭಾಜನವಾಗಿರುತ್ತವೆ

**ಮೇರಾ ಆಸ್ಪತಾಲ್:** ಮೇರಾ ಆಸ್ಪತಾಲ್ ತತ್ರಾಂಶದಿಂದ ಆಸ್ಪತ್ರೆಗಳಲ್ಲಿ ಶುಚಿತ್ವ, ಸಿಬ್ಬಂದಿ ನಡವಳಿಕೆ, ರೋಗಿಯ ಕಾಯುವಿಕೆಯ ಸಮಯ ಇತ್ಯಾದಿಗಳನ್ನು ಒಳಗೊಂಡಂತೆ, ರೋಗಿಯಿಂದ ನಿಸ್ಪಕ್ಷಪಾತ ಪ್ರತಿಕ್ರಿಯೆ (feedback) ಪಡೆಯಲಾಗುತ್ತಿದೆ. ಭಾರತ ಸರ್ಕಾರವು ಬಿಡುಗಡೆ ಮಾಡಿರುವ ಮೇರಾ ಆಸ್ಪತಾಲ್ ಕಾರ್ಯಕ್ರಮದಲ್ಲಿ ಕರ್ನಾಟಕ ರಾಜ್ಯವು ಶೇಕಡ 67% ರೋಗಿಗಳಿಗೆ ಅಂದರೆ ಪ್ರತಿ ನೂರು ರೋಗಿಗಳಲ್ಲಿ 67 ರೋಗಿಗಳು ಸರ್ಕಾರಿ ಆಸ್ಪತ್ರೆಯಲ್ಲಿ ಸಿಗುವ ಸೇವೆಗಳು ತೃಪ್ತಿಕರವಾಗಿರುತ್ತದೆಂದು ತಿಳಿಸಿರುತ್ತಾರೆ.

ಪ್ರತಿವರ್ಷವು ಹೆಚ್ಚಿನ ಸಂಖ್ಯೆಯಲ್ಲಿ ಅಸ್ಪತ್ರೆಗಳನ್ನು ರಾಷ್ಟ್ರಮಟ್ಟದ ಗುಣಮಟ್ಟ ಮೌಲ್ಯ ಮಾಪನ ಕಾರ್ಯಕ್ರಮಗಳಲ್ಲಿ ಯಶಸ್ವಿಯಾಗಿಸಲು ತರಬೇತಿ, ಮೇಲ್ವಿಚಾರಣೆ ನಡೆಸುತ್ತಿದ್ದು ಮುಂಬರುವ ದಿನಗಳಲ್ಲಿ ಇನ್ನಷ್ಟು ಉತ್ತಮವಾದ ಸೇವೆಗಳನ್ನು ನೀಡುವಲ್ಲಿ ಸರ್ಕಾರ ಕ್ರಮ ಜರುಗಿಸುತ್ತದೆ.

**ಸರ್ಕಾರಿ ಆಸ್ಪತ್ರೆಗಳಲ್ಲಿ ಸೇವಾ ಗುಣಮಟ್ಟವನ್ನು ಉತ್ತಮಪಡಿಸಲು ಕೆಳಕಂಡ ಪ್ರಮುಖ ಯೋಜನೆಗಳನ್ನು ಅನುಷ್ಠಾನಗೊಳಿಸಿದೆ.**

1. ಜೆಎಸ್‌ಎಸ್‌ಕೆ (ಜನನಿ ಶಿಶು ಸುರಕ್ಷ ಕಾರ್ಯಕ್ರಮ)
2. ಜೆಎಸ್‌ವೈ (ಜನನಿ ಸುರಕ್ಷ ಯೋಜನೆ)
3. ಎನ್‌ಎಫ್‌ಡಿಎಸ್ (ರಾಷ್ಟ್ರೀಯ ಉಚಿತ ರೋಗ ಪತ್ತೆ ಸೇವೆಗಳು ಮತ್ತು ಉಚಿತ ಔಷಧ ಸೇವೆಗಳು)
4. ಎಬಿ–ಆರ್‌ಕೆ (ಆಯುಷ್ಮಾನ್ ಭಾರತ್–ಆರೋಗ್ಯ ಕರ್ನಾಟಕ)

**ಆಕುಕ 38 ಎಸ್‌ಬಿವಿ 2021**

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು